ಒಂದಾಣೆ ಮಾಲೆ 250

# ನಗೆಗಡಲು



ಸಂಗ್ರಾಹಕರು:
ಶ್ರೀ ಎಸ್. ಗೋಪೀಚಂದರಾವ್,
ವಿದ್ವಾನ್ ಮತ್ತು ವಿಶಾರದ, ಉಡುಪಿ.



1959

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1959ನೇ ಸಪ್ಟಂಬರ ತಿಂಗಳ ಮೂರನೆಯ ವಾರದ ವರೆಗೆ 250 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕವು ಹೊರಡುತ್ತಲೇ ಇದೆ.

250 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 4822 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆ ಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆ ಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ನಗೆಗಡಲು

## ೧. ಸಮಯೋಚಿತ ಪರಿಹಾರ

ಒಬ್ಬನು ಡಾಕ್ಟರರಲ್ಲಿಗೆ ಬಂದು ತನ್ನ ರೋಗವನ್ನೂ ಪರಿಸ್ಥಿತಿಯನ್ನೂ ವಿವರವಾಗಿ ನಿವೇದಿಸಿ ಪರಿಹಾರ ನೀಡಲು ವಿನಂತಿಸಿದನು:"ಮಹಾಸ್ವಾಮಿ, ನಾನು ಬಡವ. ಮದ್ದಿಗಾಗಿ ಖರ್ಚುಮಾಡಲು ನನ್ನೊಡನೆ ಹಣವಿಲ್ಲ. ಹಾಗಿರುವಾಗಲೇ ಒಂದು ವಿಚಿತ್ರ ರೋಗ ಅಂಟಿಕೊಂಡಿದೆ. ಏನೇನು ಮಾಡಿದರೂ ನನಗೆ ರಾತ್ರಿಹೊತ್ತು ನಿದ್ದೆಯೇ ಬರುವುದಿಲ್ಲ. ತಾವು ದಯಾಳು ಎಂದು ಊರವರ ಬಾಯಿಂದ ಕೇಳಿದ್ದೇನೆ. ಏನಾದರೂ ಪರಿಹಾರವನ್ನು ಸೂಚಿಸಿ, ಹಣವ್ಯಯವಾಗದಂತೆ, ಒಂದು ಔಷಧ ಕೊಟ್ಟರೆ, ನಿಮ್ಮ ಹೆಸರು ಹೇಳಿಕೊಂಡು ದಿನ ದೂಡುವೆ!"

ಡಾಕ್ಟರರು ದೀರ್ಘಶ್ವಾಸವೊಂದನ್ನು ಬಿಟ್ಟರು. ಆ ಮೇಲೆ ತುಂಬ ಆಲೋಚಿಸುವಂತೆ ತೋರ್ಪಡಿಸುತ್ತ, ಅಂದರು:—"ಎಲ್ಲಿಯಾದರೂ ರಾತ್ರಿ ಕಾವಲುಗಾರನ ಕೆಲಸ ದೊರಕಿಸಿಕೊಳ್ಳು!"

## ೨. ಚಾಣಾಕ್ಷ ಬಾಲಕ

ಶಾಲೆಯನ್ನು ಪರಿಶೀಲನಾಧಿಕಾರಿಗಳು ಸಂದರ್ಶಿಸಿದ್ದರು. ಆಗತಾನೇ ಹೊಸತಾಗಿ ವೃತ್ತಿಗೆ ಸೇರಿಕೊಂಡ ಅಧ್ಯಾಪಕರಿಗೆ ಒಳ್ಳೆಯ 'ರಿಮಾರ್ಕ್' ಬರೆಸಿಕೊಳ್ಳಬೇಕೆಂಬ ಉತ್ಸಾಹವು ತುಂಬಿ ತುಳುಕಾಡುತ್ತಿತ್ತು. ಅವರ ವರ್ಗಕ್ಕೆ ಅಧಿಕಾರಿಗಳು ಬಂದು ಕೆಲವು ಪ್ರಶ್ನೆ ಕೇಳುವಂತೆ ಅಪ್ಪಣೆ ಪಿಸಿದರು. ಅಧ್ಯಾಪಕರು ಅಜ್ಞೆಯನ್ನು ಶಿರಸಾವಹಿಸಿ ಒಬ್ಬ ಹುಡುಗನೊಡನೆ ಕೇಳಿದರು:—"ವಾಟ್ ಈಸ್ ಯುವರ್ ನೇಮ್?"

ವಿದ್ಯಾರ್ಥಿ ತಟ್ಟನೆ ಎದ್ದುನಿಂತು ಹೇಳಿದ "ಸೂರ್ಯಪ್ರಕಾಶ."

ಆಗ ಪರಿಶೀಲನಾಧಿಕಾರಿಗಳೆಂದರು:—"ಇಂಗ್ಲಿಷ್‌ನಲ್ಲಿ ಹೇಳು, ನೋಡುವ."

ಹುಡುಗ ಒಂದು ಕ್ಷಣ ಅತ್ತಿತ್ತ ನೋಡಿ, ಧೈರ್ಯ ತಂದುಕೊಂಡು ಹೇಳಿದ:—"ವ್ಹೈ ನೇವರ್ ಝಸ್ ಸನ್‌ಲೈಟ್."

ಎಲ್ಲರೂ ಮುಖ ಮುಖ ನೋಡಿಕೊಂಡರು.

## ೩. ಸುಯೋಗ್ಯ ಸಂಶೋಧನೆ

ಮೂರು ಜನ ಗ್ರಾಮಸ್ಥರು ದೆಹಲಿದರ್ಶನಮಾಡಿದರು. ಅಲ್ಲಿ ಕುತುಬ್ ಮಿನಾರವನ್ನು ಕಂಡು ಅವರಿಗೆ ಆಶ್ಚರ್ಯದಲ್ಲಿ ಆಶ್ಚರ್ಯವಾಯಿತು. ಅದರಲ್ಲೂ ಅವರಿಗೆ ಅಷ್ಟು ಎತ್ತರವಾದ ಮಿನಾರವನ್ನು ನೆಟ್ಟಗೆ ಹೇಗೆ ನಿಲ್ಲಿಸಿದರೆಂದು ಹೊಳೆಯಲಿಲ್ಲ, ಬಹಳ ದೀರ್ಘಕಾಲ ಆಲೋಚನೆ ಮಾಡಿ, ತನ್ನ ಮೇಧಾಶಕ್ತಿಗೆ ತಾನೇ ಮೆಚ್ಚಿ ಮೊದಲನೆಯವ ಹೇಳಿದ:— "ನಮ್ಮ ಪೂರ್ವಜರು ದೀರ್ಘದೇಹಿಗಳಾಗಿದ್ದರಂತೆ. ಪ್ರಾಯಃ ಈ ಮಿನಾರವನ್ನು ಕಟ್ಟಿದವನೂ ಇಷ್ಟು ಎತ್ತರವಿದ್ದಿರಬೇಕು. ಎಂತಲೇ ಇದನ್ನು ಇಷ್ಟೊಂದು ಸೌಂದರ್ಯಯುಕ್ತವಾಗಿ ಕಟ್ಟುವುದು ಸಾಧ್ಯವಾಯಿತು."

ಎರಡನೆಯವನು ತನ್ನ ಸ್ನೇಹಿತನ ಈ ವಾದವನ್ನು ಒಪ್ಪುವಷ್ಟು ಮೂರ್ಖನಾಗಿರಲಿಲ್ಲ. ಅವನೂ ಆಲೋಚಿಸಿ, ಗೋಣೇರಿಸಿ ಹೇಳಿದನು:— "ಎಂತಹ ಮೂರ್ಖನಯ್ಯ ನೀನು? ಯಾವ ಕಾಲದಲ್ಲಿಯೇ ಇರಲಿ, ಇಷ್ಟೆತ್ತರದ ಆಳಿರುವುದು ಸಾಧ್ಯವಿಲ್ಲ. ಇದನ್ನು ಮೊದಲು ನೆಲದಲ್ಲಿ ಕಟ್ಟಿ, ಮತ್ತೆ ಹಗ್ಗ ಸರಪಳಿಗಳ ಸಹಾಯದಿಂದ ಎತ್ತಿ ನಿಲ್ಲಿಸಿದರು."

ಇದನ್ನು ಕೇಳಿದ ಮೂರನೆಯ ಬುದ್ಧಿವಂತ ಸುಮ್ಮನಿದ್ದಾನೇ? ಅವನು ತನ್ನ ಸಹೃದ್ವಯರ ಅಂಬೋಣವನ್ನು ಅಲ್ಲಗಳೆದು, ಅವರಿಗೆ ಮೂರ್ಖಶಿರೋಮಣಿ ಪದವಿಯಿತ್ತು, ತಾನು ಮೇಧಾವಿ ಎಂಬುದನ್ನು ಬಹಿರಂಗಪಡಿಸಲು ಸರಿಯಾದ ಕಾರಣವನ್ನು ಯೋಚಿಸಿ ತರ್ಕಿಸಿ ಕಂಡುಹಿಡಿದನು: "ನೋಡಿ, ನಿಮಗಿಬ್ಬರಿಗೂ ಬುದ್ಧಿಯಿಲ್ಲ. ಅದಕ್ಕೆಂದೇ ನೀವಿಬ್ಬರೂ ಡಿಲ್ಲಿಗೆ ಬರಲು ಅಯೋಗ್ಯರೆಂದು ಮೊದಲೇ ಎಚ್ಚರಿಸಿದ್ದೆ. ಆದರೆ, ನೀವು ಕೇಳಬೇಕಲ್ಲಾ! ಇರಲಿ, ಈ ಮಿನಾರವನ್ನು ನಿಲ್ಲಿಸಿದುದು ಹೇಗೆ ಗೊತ್ತೆ? ಕೇಳಿ. ಮೊದಲು ಈ ಮಿನಾರದಷ್ಟು ಆಳದ ಬಾವಿಯನ್ನು ತೋಡಿದರು. ಅದರಲ್ಲಿ ಮಿನಾರವನ್ನು ಕಟ್ಟಿದರು. ಕೊನೆಗೆ ಬಾವಿಯನ್ನು ಮುಚ್ಚಿಬಿಟ್ಟರು. ಆಗ ಮಿನಾರ ತಾನಾಗಿಯೇ ಮೇಲೆ ಎದ್ದು ನಿಂತಿತು. ಗೊತ್ತಾ

ಯಿತೆ? ಬುದ್ಧಿಯಿದ್ದ ಮನುಷ್ಯ ಯಾವ ಕೆಲಸವನ್ನೂ ಮಾಡಬಲ್ಲನೆಂಬುದಕ್ಕೆ ಕುತುಬ್ ಮಿನಾರವೇ ಸಾಕ್ಷಿ!”

## ೪. ಕಿವಿಯಲ್ಲಿಯೇ ಪ್ರಾರ್ಥನೆ

ಒಬ್ಬಾಕೆ ನೀಗ್ರೋ ಜನಾಂಗದ ಕಪ್ಪು ಹುಡುಗಿಯ ತಾಯಿಯು, ಒಬ್ಬ ಶ್ರೀಮಂತ ಆಂಗ್ಲೇಯರಲ್ಲಿ ಚಾಕರಿಮಾಡಿಕೊಂಡಿದ್ದಳು. ಒಂದು ದಿನ ಆ ಆಂಗ್ಲೇಯನ ಹತ್ತು ವರ್ಷದ ಕುಮಾರನು, ಆ ನಿಗ್ರೋ ಹೆಂಗಸಿನ ಈ ಒಂಭತ್ತು ವರ್ಷದ ಬಾಲಿಕೆಯೊಡನೆ ಪ್ರಶ್ನಿಸಿದನು: “ನಿನಗೆ ಪ್ರಾರ್ಥನೆ ಮಾಡಲು ತಿಳಿದಿದೆಯೆ?”

ಹುಡುಗಿಯು ದೃಢವಿಶ್ವಾಸದಿಂದ ತಲೆದೂಗುತ್ತ ಹೇಳಿದಳು:“ಮತ್ತೆ? ನಮಗಂತೂ ಪ್ರಾರ್ಥನೆ ಮಾಡದೆ ರಾತ್ರಿ ನಿದ್ರೆಯೇ ಹಿಡಿಯಲಾರದು.”

ಆಂಗ್ಲೇಯ ಬಾಲಕನು ಪುನಃ ಕೇಳಿದನು: “ಆದರೆ, ನಿಮ್ಮ ಪ್ರಾರ್ಥನೆಯನ್ನು ದೇವರು, ಬಿಳಿಯರಾದ ನಮ್ಮ ಪ್ರಾರ್ಥನೆಯನ್ನು ಕೇಳುವಷ್ಟು ಶೀಘ್ರದಲ್ಲಿ ಕೇಳುತ್ತಾನೆಯೆ?”

ಹುಡುಗಿಗೆ ಈ ಪ್ರಶ್ನೆಯೇ ಅರ್ಥವಾದಂತೆನಿಸಲಿಲ್ಲ. ಅವಳು ಒಂದು ಕ್ಷಣ ಅತ್ತಿತ್ತ ನೋಡಿ, ಮತ್ತೆ ಮೌನವನ್ನು ಭೇದಿಸಿ ಉತ್ತರಿಸಿದಳು: “ನಾವು ನೇರಾಗಿ ಪರಮಾತ್ಮನ ಕಿವಿಯಲ್ಲೇ ಪ್ರಾರ್ಥನೆಮಾಡುತ್ತೇವೆ. ಆದುದರಿಂದ ಆತ ಆಲಿಸಬೇಕಾದ ಪ್ರಮೇಯವೇ ಇಲ್ಲ.”

## ೫. ಆಮಂತ್ರಿತ ಅತಿಥಿ ಯಾರು?

ವಿಖ್ಯಾತ ನಾಟಕಕಾರ ಬರ್ನಾರ್ಡ್‌ಶಾರಿಗೆ ಒಂದು ಬಾರಿ ಒಬ್ಬ ಮಹಿಳೆಯ ಮನೆಯಲ್ಲಿ ಒಂದು ರಾತ್ರಿಯ ಭೋಜನಕೂಟಕ್ಕೆ ಆಮಂತ್ರಣ ಬಂದಿತು. ಶಾರವರಿಗೆ ಅಂದು ಎಲ್ಲಿಗೋ ಹೋಗಬೇಕಾಗಿತ್ತು. ಹಿಂದಿರುಗಿ ಬರುವಾಗ ತುಂಬ ತಡವಾಗುವ ಸಂಭವವಿರುವುದರಿಂದ ಅವರು ಕ್ಷಮೆ ಬೇಡಿದರು. ಆದರೆ, ಮಹಿಳೆ ಬಿಡದೆ, “ಎಷ್ಟು ತಡವಾದರೂ ಚಿಂತೆಯಿಲ್ಲ; ನೀವು ಮರಳಿದೊಡನೆಯೇ ನಮ್ಮಲ್ಲಿಗೆ ಬನ್ನಿರಿ” ಎಂದು ಆಗ್ರಹಪಡಿಸಿದಳು.

ಶಾ ಏನೂ ಮಾಡಲು ತೋಚದೆ ತನ್ನ ಕೆಲಸ ಮುಗಿದ ಮೇಲೆ ನೇರಾಗಿ ಮಹಿಳೆಯ ಮನೆ ಸೇರಿದರು. ಆಕೆ ಅವರನ್ನು ಸ್ವಾಗತಿಸುತ್ತ

ಅವರ ಬಟ್ಟೆಗಳತ್ತ ದೃಷ್ಟಿ ಹಾಯಿಸಿ ಹೇಳಿದಳು: "ತಾವು ಸಂಜೆಯ ತೊಡುಗೆಗಳನ್ನು ತೊಟ್ಟುಕೊಳ್ಳದೇನೇ ಬಂದುದು ನಾಚಿಕೆಯ ವಿಷಯ."

ಶಾರವರು ತಮ್ಮ ತಪ್ಪಿಗಾಗಿ ಕ್ಷಮೆ ಬೇಡಿ ಹೊರಬಂದರು. ಹತ್ತು ಮಿನಿಟುಗಳಲ್ಲಿ ಅವರು ಸಂಧ್ಯಾಕಾಲದ ವಸ್ತ್ರ ಧರಿಸಿ ಅಲ್ಲಿ ಕಾಣಿಸಿಕೊಂಡಾಗ, ಮಹಿಳೆಯ ಆನಂದಕ್ಕೆ ಪಾರವೇ ಇರಲಿಲ್ಲ. ಶಾರವರು ಎಲ್ಲರಂತೆಯೇ ಒಂದು ಕುರ್ಚಿಯಲ್ಲಿ ಮಂಡಿಸಿದರು. ಮೇಜಿನ ಮೇಲಿದ್ದ ಆಯಿಸ್ ಕ್ರೀಮಿನ ಲೋಟೆಯನ್ನು ಎತ್ತಿ ಚಮಚದಿಂದ ಎಲ್ಲರೂ ಹೀರುತಿದ್ದರೆ, ಶಾರವರು ಚಮಚದಿಂದ ತಮ್ಮ ಬಟ್ಟೆಯ ಮೇಲೆ ಎರಚಲಾರಂಭಿಸಿದರು.

ಶಾರವರ ಈ ಕೆಲಸದ ಅರ್ಥ ಯಾರ ಮನಸ್ಸಿಗೂ ಬರಲಿಲ್ಲ. ಅವರೆಲ್ಲರೂ ಶಾರವರನ್ನು ನೆಟ್ಟ ದೃಷ್ಟಿಯಿಂದ ನೋಡತೊಡಗಿದರು. ಆಗ ಶಾ ಹೇಳಿದರು: "ನನ್ನ ಪ್ರೀತಿಯ ಬಟ್ಟೆಗಳೇ, ಸತ್ಯ ಹೇಳುವುದಾದರೆ, ಈ ಆಮಂತ್ರಣ ನನಗಲ್ಲ; ನಿನಗೆ. ಆದುದರಿಂದ ಈ ಆಯಿಸ್ ಕ್ರೀಮನ್ನು ನಿನಗೇನೇ ಕುಡಿಸುತಿದ್ದೇನೆ, ಕುಡಿ, ಕುಡಿ!"

ಇಷ್ಟು ಹೇಳುತ್ತಲೇ ಅವರು ತನ್ನನ್ನು ಆಮಂತ್ರಿಸಿದ ಮಹಿಳೆಯನ್ನು ನಮಸ್ಕರಿಸುತ್ತ, ನೆಟ್ಟಗೆ ಹೊರಬಂದರು.

## ೬. ಪರಿಹಾರ ಸೂತ್ರ

ಶಾಲೆಗೆ ತೆರಳುವ ಸತೀಶ ತನ್ನ ತಾಯಿಯ ಬಳಿಗೆ ಬಂದು ಹಠಹಿಡಿದು ಹೇಳತೊಡಗಿದ–"ಅಮ್ಮಾ, ನನಗೆ ಶಾಲಾ ಸಂಬಳವನ್ನಿಂದೇ ತುಂಬಬೇಕು; ಇಲ್ಲವಾದರೆ, ಉಪಾಧ್ಯಾಯರು ದಿನವಿಡೀ ಬಿಸಿಲಿನಲ್ಲಿ ನಿಲ್ಲಿಸುವರು."

ತಾಯಿ ಯಾವ ಚಿಂತೆಯನ್ನೂ ತೋರಿಸದೇನೇ ಉತ್ತರಿಸಿದಳು— "ಚಿಂತೆಯಿಲ್ಲ; ನಿಲ್ಲಿಸಲಿ, ಅದಕ್ಕೇನಂತೆ? ನಿನಗೆ ನಾನಿಂದು ಕೊಡೆ ತೆಗೆದುಕೊಂಡು ಹೋಗಲು ನೆನಪು ಮಾಡುತ್ತೇನೆ!"

## ೭. ದೊಡ್ಡ ಮಗುವಲ್ಲವೆ?

ತಾಯಿಯ ಬಾಲವನ್ನು ಹಿಡಿಯಲು ಪ್ರಯತ್ನಿಸುತಿದ್ದ ತನ್ನ ಕಿರಿಯ ಮಗುವನ್ನು ತಾಯಿ ತಡೆದು ಹೇಳಿದಳು: "ಮಗೂ, ತಾಯಿಯ ಬಾಲ ಹಿಡಿಯಬೇಡ, ಕಡೆಗೆ ಅದು ಕಚ್ಚಿಬಿಟ್ಟೀತು!"

"ಅಮ್ಮಾ, ಬಾಲದ ಬಾಯಿ ಎಲ್ಲಿದೆ?"—ಮಗು ಮುಗ್ಧವಾಗಿಯೇ ಕೇಳಿಬಿಟ್ಟಿತು!'

## ೮. ಕಲಾತ್ಮಕಗೃಹ

ಅಮೆರಿಕೆಯ ಸುಪ್ರಸಿದ್ಧ ಶಿಲ್ಪಿ ಎನಿಸಿದ ದಿವಂಗತ ಫ್ರಾಂಕ್ ಲೊಯ್ಡ್ ರೈಟರು ಕಲೆಯಲ್ಲಿ ಉನ್ನತ ಆದರ್ಶವಾದಿಯೂ ಜ್ಞಾನಿಯೂ ಆಗಿದ್ದರಲ್ಲದೇ ಉತ್ತಮ ಹಾಸ್ಯಪಟುವೆನಿಸಿಕೊಂಡಿದ್ದರು.

ಒಂದು ಬಾರಿ ಲೊಯ್ಡ್ ರೈಟರು ತಮ್ಮ ಸಂಬಂಧಿಕನಾದ ಶ್ರೀ। ರಿಚಾರ್ಡ ಲೊಯ್ಡ್ ಜಾನ್ಸರಲ್ಲಿಗೆ ಆಗಮಿಸಿದಾಗ, ಅವರು ತಮ್ಮ ವಾಸಕ್ಕಾಗಿ ಒಂದು ಮನೆಯ ಕರಡು ನಕ್ಷೆಯನ್ನು ರಚಿಸಿ, ಕಟ್ಟಿಸಿಕೊಡುವಂತೆ ಕೇಳಿಕೊಂಡರು,

ರೈಟರು ಈ ಕೆಲಸವನ್ನು ಒಪ್ಪಿಕೊಂಡು ಅವರಿಗಾಗಿ ಒಂದು ಮನೆಯನ್ನು ಕಟ್ಟಿಸತೊಡಗಿದರು. ಕೆಲ ತಿಂಗಳುಗಳಲ್ಲಿ ಮನೆಯೂ ಪೂರ್ಣಗೊಂಡಿತು. ಜೋನ್ಸರು ಈ ನೂತನಗೃಹದಲ್ಲಿ ನೆಲಸತೊಡಗಿದರು.

ಕೆಲವು ಕಾಲ ಕಳೆಯಿತು. ಇನ್ನೊಂದು ಬಾರಿ ರೈಟರು ತಮ್ಮ ಸಂಬಂಧಿಕರನ್ನು ಭೇಟಿಯಾಗಹೋದಾಗ ಜಾನ್ಸರೊಡನೆ ಕೇಳಿದರು—"ಈ ಹೊಸ ಮನೆಯು ತಮಗೆ ಮೆಚ್ಚುಗೆಯಾಯಿತೆ?"

"ಬಹಳ ಸುಂದರವಿದೆ. ನಾನು ಈ ಮನೆಯನ್ನು ತುಂಬ ಮೆಚ್ಚುತ್ತೇನೆ. ಆದರೆ, ಮಳೆಯು ಸುರಿಯುವಾಗ, ಮಾತ್ರ ಇದು ಸೋರುತ್ತದೆ" ಎಂಬುತ್ತರ ಬಂತು.

ರೈಟರು ಗಟ್ಟಿಯಾಗಿ ನಕ್ಕುಬಿಟ್ಟರು; ಮತ್ತು ಹೇಳಿದರು—"ಏನೆನ್ನುತ್ತೀರಿ ನೀವು? ಮಳೆಗೆ ಸೋರುತ್ತದೆಯೆಂದೆ? ಈ ಮನೆಯು ಕಲಾತ್ಮಕವಾಗಿದೆ, ಅದನ್ನು ಮಳೆಗೆ ನೆನೆಯಲು ಬಿಡಬಾರದು!"

## ೯. ಸರಿಯಾದ ಕಾರಣ

ಒರ್ವ ವ್ಯಕ್ತಿ ಇನ್ನೊಬ್ಬನೊಡನೆ ಪ್ರಚಲಿತ ಸನ್ನಿವೇಶಗಳ ಕುರಿತು ಚರ್ಚೆಗೆ ಮೊದಲುಮಾಡಿದ. "ಈಗೀಗ ಕಾಗದದ ಬೆಲೆ ಅತ್ಯಧಿಕವಾಗಿ ಏರಲು ಕಾರಣವೇನು?"

ಆತ ತತ್‌ಕ್ಷಣವೇ ಉತ್ತರಿಸಿದ—"ಏನು ಹೇಳುತ್ತೀಯ? ಲೇಖಕರ ಸಂಖ್ಯೆಯು ದಿನೇ ದಿನೇ ಬೆಳೆಯುತ್ತ ಹೋಗುತ್ತಿದೆ ನೋಡು!"

## ೧೦. ಇದು ಉತ್ತರವಲ್ಲವೆ?

ಅಧ್ಯಾಪಕ: ವಾಸ್ಕೋಡಿಗಾಮನು ಭಾರತಕ್ಕೆ ಮೊದಲು ಪಾದಾರ್ಪಣ ಮಾಡಿದ ಮೇಲೆ ಏನು ಮಾಡಿದನ.?"

ವಿದ್ಯಾರ್ಥಿ: "ಇನ್ನೊಂದು ಪಾದವನ್ನೂ ಅರ್ಪಣೆಮಾಡಿಬಿಟ್ಟನು."

## ೧೧. ಸತ್ಯ ಘಟನೆ, ಇದು

ಇತಿಹಾಸದ ಅಧ್ಯಾಪಕರು: "ಜಲಾಲುದ್ದೀನನು ಮೃತ್ಯುಮುಖನಾದ ಮೇಲೆ ಅವನ ರಾಜ್ಯದಲ್ಲಿ ಯಾವ ಘಟನೆ ನಡೆಯಿತು?"

ವಿದ್ಯಾರ್ಥಿ: "ಅವನ ಅಂತಿಮ ಸಂಸ್ಕಾರವು ವೈಭವಪೂರ್ಣವಾಗಿ ನೆರವೇರಿತು."

## ೧೨. ಪರಿಣಾಮ ರಮಣೀಯವೇ

ಅಶೋಕ ಮತ್ತು ಮದನರು ಭಾರಿಯ ಸಮಸ್ಯೆಗಳಿಂದ ಒದಗಬಹುದಾದ ಗಂಭೀರ ಪರಿಸ್ಥಿತಿಗಳ ಪರಿಣಾಮಗಳನ್ನು ಚಿಂತಿಸುತ್ತ ಬರುತಿದ್ದರು.

ಅಶೋಕ: "ಒಂದುವೇಳೆ ಎಲ್ಲ ಕ್ಷೌರಿಕರೂ ಸತ್ಯಾಗ್ರಹ ಮಾಡತೊಡಗಿದರೆ, ಆಗ............?"

ಮದನ: "ಅಯ್ಯೋ ಬೆಪ್ಪ! ಅದಕ್ಕೇಕೆ ಚಿಂತೆ?"

ಅಶೋಕ: "ಏನಪ್ಪಾ............?"

ಮದನ: "ತಿಂಗಳಿಗೆ ಒಂದೆಂಟಾಣೆ ಉಳಿಯಿತು."

## ೧೩. ವಿನೀತ ಪುತ್ರನಲ್ಲವೇ?

ತಂದೆ: "ಮಗೂ, ನಾಳೆ ನಾನು ಮಂಗಳೂರಿಗೆ ಹೋಗಲಿದ್ದೇನೆ. ನಿನಗೆ ಅಲ್ಲಿಂದ ಏನು ತರಬೇಕು?"

ಮಗು ಸಮಿಾಪದಲ್ಲಿ ಹೇಳಬೇಕೋ ಬೇಡವೋ ಎಂದು ಚಿಂತಿಸುತ್ತ ನಿಂತ. ತಂದೆಗೆ ತನ್ನ ಮಗನ ವಿನೀತಭಾವ, ಭಯಭಕ್ತಿಗಳನ್ನು ಕಂಡು ಮೈಯೆಲ್ಲ ಹರ್ಷಪುಲಕಿತವಾಯಿತು. ಎಂತಲೇ ಅವನನ್ನು ಕೈಹಿಡಿದು ಕುಳ್ಳಿರಿಸಿ ಮೃದುವಾಗಿ ಕೇಳಿದರು: "ನೋಡಪ್ಪಾ, ಏನು ತರಬೇಕು? ಹೆದರಬೇಡ, ಹೇಳು."

ಮಗು, ಎಲ್ಲಿಲ್ಲದ ಧೈರ್ಯ ತಂದುಕೊಂಡು ಹೇಳಿತು: "ಅಪ್ಪಾ...."

ಅಪ್ಪ: "ಏನು ಮಗೂ? ಹೇಳು, ಹೇಳು!"

ಮಗ: "ಅಪ್ಪಾ........ನಿನ್ನೆ........ನನ್ನ........ಪ . . ತ . . ಂ . . ಗ ಹಗ್ಗ ಕಡಿದು ತಪ್ಪಿಸಿಕೊಂಡುಹೋಯ್ತು. ಅದೆಲ್ಲಿಯಾದರೂ ಕಾಣ ಸಿಕ್ಕಿದರೆ, ಹಿಡಿದುಕೊಂಡು ಬಾಪ್ಪ."

ತಂದೆ: ವಿಸ್ಮಿತರಾಗಿ ಕುಳಿತುಬಿಟ್ಟರು!

## ೧೪. ವೈದ್ಯರೇ ಹೇಳಿದ್ದಾರೆ

ರಾಮು ಮತ್ತು ಶ್ಯಾಮರು ತಮ್ಮ ರೋಗಗ್ರಸ್ತೆ ಸೋದರಿಯ ಕುರಿತಾಗಿ ಆಡಿಕೊಳ್ಳುತ್ತಿದ್ದರು.

ರಾಮು: "ಶ್ಯಾಮೂ, ನೀನು ಈಕೆಯ ಕೈಗಳನ್ನು ಹಿಡಿ; ನಾನು ಕಾಲುಗಳನ್ನು ಹಿಡಿಯುವೆನು. ಇಬ್ಬರೂ ಒಟ್ಟು ಸೇರಿ ಈಕೆಯನ್ನು ಅಲುಗಾಡಿಸಿಬಿಡೋಣ. ಔಷಧಿ ಕೊಡುವ ವೇಳೆ ಆಯಿತು."

ಶ್ಯಾಮು: "ಅದೇಕೆ ಹಾಗೆ?"

ರಾಮು: "ಮದ್ದನ್ನು ಕುಡಿಸುವುದಕ್ಕೆ ಮೊದಲು ಚೆನ್ನಾಗಿ ಅಲುಗಾಡಿಸಿ ಆ ಮೇಲೆ ಕೊಡಬೇಕೆಂದು ವೈದ್ಯರು ಹೇಳಿದ್ದಾರೆ!"

## ೧೫. ದೇವರ ದಯೆ ಮುಖ್ಯ

ಒರ್ವ ಮಿತ್ರ ರುಗ್ಣಶಯ್ಯೆಯಲ್ಲಿ ಮಲಗಿದ್ದ ಸ್ನೇಹಿತನನ್ನು ನೋಡಲು ಹೋದನು.

"ಹೇಗಿದೆ ಈಗ "

"ಜ್ವರ ಬರುತಿತ್ತು; ಈಗ ಅದು ದೂರವಾಗಿದೆ. ಆದರೆ, ಏನೋ, ದೇಹದೊಳಗೆ ಒಂದು ತರಹದ ಅವ್ಯಕ್ತ ವೇದನೆಯಾಗುತ್ತಿದೆ?"

ಈತ ತೃಪ್ತಿಸೂಚಕ ನಗು ಬೆರಸಿಹೇಳಿದ—"ಮರುಗಬೇಡ, ದೇವರ ದಯೆಯೊಂದಿದ್ದರೆ, ದೇಹವೂ ದೂರಹೋದೀತು."

## ೧೬. ನೀವೇ ಹೇಳಿದಿರಲ್ಲ?

ಒರ್ವ ಮಾಲಿಕನಲ್ಲಿಗೆ ಕೆಲಸವರಸುತ್ತ ಒಬ್ಬ ನಿರುದ್ಯೋಗಿ ಬಂದು ಉದ್ಯೋಗಾವಕಾಶ ಬೇಡಿದನು. ಮಾಲಿಕ ದರ್ಪದಿಂದ ಕೇಳಿದ—"ನಿನ್ನ ಹೆಸರೇನು?"

ನಿರುದ್ಯೋಗಿ: "ಸೀತಾರಾಮು."

ಮಾಲಿಕ: "ಛಿ, ನಿನಗೆ ಹೇಗೆ ಮಾತಾಡಬೇಕೆಂದೇ ಗೊತ್ತಿಲ್ಲ. ಮೊದಲು 'ಸ್ವಾಮಿ' ಎಂದು ಹೇಳಬೇಕು. ನೋಡೋಣ, ನಿನ್ನ ಹೆಸರೇನೆಂದು ಇನ್ನೊಮ್ಮೆ ಹೇಳು."

ನಿರುದ್ಯೋಗಿ: "ಸ್ವಾಮಿ ಸೀತಾರಾಮು."

## ೧೭. ಆಮೆ ನಡಿಗೆ ಯಾಕೆ?

ನರೇಂದ್ರ: "ಕಮಲಾ, ನೀನು ಯಾರಿಗೆ ಈ ಪತ್ರವನ್ನು ಬರೆಯುತ್ತಿರುವೆ?"

ಕಮಲ: "ನನ್ನ ತಾಯಿಗೆ"

ನರೇಂದ್ರ: "ಅದೇನು, ಬರೀ ನಿಧಾನವಾಗಿ ಬರೆಯುತ್ತಿರುವೆ?"

ಕಮಲ: "ನನ್ನ ತಾಯಿ ಮೆಲ್ಲನೇ ಓದಬೇಕೆಂದು."

## ೧೮. ಒಳ್ಳೆಯ ಅಧ್ಯಾಪಕರು!

ತನ್ನ ಮಗಳು ಸೊಂಟದಲ್ಲಿ ಹಗ್ಗ ಕಟ್ಟಿಕೊಂಡಿರುವುದನ್ನು ಕಂಡು, ತಾಯಿಯು ಆಶ್ಚರ್ಯಚಕಿತಳಾಗಿ ಕೇಳಿದಳು: "ಮಗಳೆ, ನೀನೇಕೆ ಸೊಂಟದಲ್ಲಿ ಹಗ್ಗ ಬಿಗಿದುಕೊಂಡಿರುವೆ?"

ಮಗಳು ಸಂತೋಷದಿಂದ ಹೇಳಿದಳು: "ಅಲ್ಲಮ್ಮಾ, ನಾಡದು ಶಾಲೆಯಲ್ಲಿ ಪರೀಕ್ಷೆ ಬಂತು. ಅದರಲ್ಲಿ ತೇರ್ಗಡೆ ಹೊಂದಬೇಕಾದರೆ ಸೊಂಟಕಟ್ಟಿ ಓದಬೇಕೆಂದು ಅಧ್ಯಾಪಕರು ಹೇಳಿದ್ದಾರೆ. ಅಷ್ಟಕ್ಕೇನೇ...."

## ೧೯. ನಿಮಗಿದು ಗೊತ್ತೆ?

ಶಾಲೆಯಲ್ಲಿ ದಡ್ಡಿಯಾದ ಹುಡುಗಿಯೊಬ್ಬಳಿಗೆ ಅಧ್ಯಾಪಕರು ಗದರಿಸುತಿದ್ದರು: "ಈ ದಿನ ಕಲಿಸಿಕೊಟ್ಟುದನ್ನು ಕಲಿತುಕೊಂಡು ನಾಳೆ ಬಾರದೆಹೋದರೆ, ನಿನ್ನ ತಂದೆಯನ್ನು ಇಲ್ಲಿಗೆ ಕರೆಸುತ್ತೇನೆ."

ಹುಡುಗಿ: "ಸರ್, ನಮ್ಮ ತಂದೆ ಒಂದೆಡೆಗೆ ಬರಬೇಕಾದರೆ, ಐದು ರೂಪಾಯಿ ಫೀಸ್ ತಗೊಳ್ಳುತ್ತಾರೆ. ಅದು ನಿಮಗೆ ಗೊತ್ತಿಲ್ಲವೆ?"

ಅವಳು ಡಾಕ್ಟರರ ಮಗಳಾಗಿದ್ದಳು.

## ೨೦. ಕಾರಣ ಸರಿ ತಾನೆ?

ಸಖೀ: "ವಸಂತಿ, ನಿನ್ನ ತಲೆಯಲ್ಲಿ ಗೊಬ್ಬರವೇ ತುಂಬಿಕೊಂಡಿದೆ."

ವಸಂತಿ: "ಆದುದರಿಂದಲೇ ಅದು ಸಮೃದ್ಧವಾಗಿದೆ."

## ೨೧. ಆ ಭಾಗ್ಯ ನನಗಿಲ್ಲ

ಅಧ್ಯಾಪಕ: "ನೀನೊಬ್ಬ ಬರೀ ಕತ್ತೆ. ನಿನ್ನ ಪ್ರಾಯದಲ್ಲಿ ನಾನು ಚೆನ್ನಾಗಿ ಓದುತ್ತಿದ್ದೆ."

ವಿದ್ಯಾರ್ಥಿ: "ಪ್ರಾಯಃ ನಿಮಗೆ ಒಳ್ಳೆಯ ಅಧ್ಯಾಪಕರು ದೊರಕಿರ ಬೇಕು. ಆ ಭಾಗ್ಯ ನನಗೆ ಮಾತ್ರ...."

## ೨೨. ಸುಯೋಗ್ಯ ಸಲಹೆ

ಮಗನೊಬ್ಬ ತನಗೆ ಹಿಂದಿನ ರಾತ್ರಿ ಸ್ವಪ್ನದಲ್ಲಿ ಒರ್ವ ದುಷ್ಟನು ಕಾಣಿಸಿಕೊಂಡು ತನ್ನನ್ನು ಚೆನ್ನಾಗಿ ಥಳಿಸಿದನೆಂದೂ, ಆದಕ್ಕೆ ಪರಿಹಾರ ವೇನೆಂದೂ ವಿಚಾರಿಸಿದನು.

ತಂದೆ ಗಂಭೀರವಾಗಿ ವಿಚಾರವನ್ನು ವಿಮರ್ಶಿಸಿ ಸಲಹೆಯಿತ್ತನು: "ಹಾಗಾದರೆ, ಇಂದು ರಾತ್ರಿ ಮಲಗುವ ಸಮಯ ಒಂದು ದೊಣ್ಣೆಯನ್ನು ಸಮೀಪದಲ್ಲಿಟ್ಟುಕೊ. ಒಂದು ವೇಳೆ ಪುನಃ ನಿನ್ನೆದುರು ಆತ ಬಂದರೆ, ನೀನು ಹೆದರದೆ ನಾಲ್ಕು ಥಳಿಸಿ ಬಿಡು!

## ೨೩. ನಿನಗೆ ಮಗ ಬೇಡವೆ?

ಮಗ ಸ್ನಾನಮಾಡಲು ಒಪ್ಪದಿರಲು, ತಾಯಿ ಜೋರುಮಾಡ ತೊಡಗಿದಳು.

ಮಗ: "ಅಮ್ಮಾ, ಉಪಾಧ್ಯಾಯರು ನಿನ್ನೆ ಹೇಳಿದ್ದಾರೆ.........."

ತಾಯಿ: "ಹೌದು, ಹೌದು. ಅವರು ಸ್ನಾನಮಾಡಬಾರದು ಎಂತು ಅಂದಿದ್ದಾರೆ."

ಮಗ: "ಹಾಗಲ್ಲಮ್ಮಾ, ಮನುಷ್ಯನು ಮಣ್ಣಿನಿಂದಲೇ ಆಡವನು ಎಂದಿದ್ದಾರೆ. ನಾನು ನೀರಿನಿಂದ ಸ್ನಾನಮಾಡಿದರೆ ಕೆಸರಾಗಿ ಕರಗಿ ಹೋದರೆ ಮತ್ತೆ ನಿನಗೆ ಮಗನೆಲ್ಲಿಯಮ್ಮಾ?"



Edited, Printed & Published by K. V. Shenoy
at The Prabhat Printers, Ltd. Mangalore